ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ರಾಜ್ಯದಲ್ಲಿನ ಗಣಿಗಾರಿಕೆಗಳ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು):-

ಶ್ರೀ ಜಿ. ರಘು ಆಚಾರ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

153 (1288+1292) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಗಣಿಗಾರಿಕೆ ಮಾಡಲು ಅನುಮತಿ ನೀಡಲಾಗಿದೆಯೇ ; ಇದ್ದಲ್ಲಿ, ಎಷ್ಟು ಸ್ಥಳಗಳಲ್ಲಿ ಗಣಿಗಾರಿಕೆ ಮಾಡಲು ಅನುಮತಿ ನೀಡಲಾಗಿದೆ ;(3 ವರ್ಷಗಳ ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಗಣಿಗಾರಿಕೆ ಮಾಡಲು ಸರ್ಕಾರ ರೂಪಿಸಿರುವ ಮಾನದಂಡಗಳೇನು ; ಹಾಗೂ ಗಣಿಗಾರಿಕೆ ಮಾಡಲು ಅನುಸರಿಸಬೇಕಾದ ಕ್ರಮಗಳೇನು ;

(ಇ) ಗಣಿಗಾರಿಕೆಯಿಂದ ಪರಿಸರ ಮಾಲಿನ್ಯ ಹೆಚ್ಚಾಗುತ್ತಿದ್ದು, ಇದನ್ನು ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ; (ವಿವರ ನೀಡುವುದು)

(ಈ) ಕಳೆದ 5 ವರ್ಷಗಳಲ್ಲಿ ಚಿತ್ರದುರ್ಗ ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿ ನಡೆಯುತ್ತಿರುವ ವಿವಿಧ ರೀತಿಯ ಗಣಿಗಾರಿಕೆಯಿಂದ ಸರ್ಕಾರದ ಬೊಕ್ಕಸಕ್ಕೆ ಬಂದಿರುವ ರಾಜಧನದ (ರಾಯಲ್ಟಿ) ಮೊತ್ತ ಎಷ್ಟು ; (ವರ್ಷವಾರು ಇದರ ವಿವರ ನೀಡುವುದು)

(ಉ) ಸದರಿ ರಾಜಧನವನ್ನು ಯಾವ ಉದ್ದೇಶಕ್ಕಾಗಿ ಸರ್ಕಾರ ಬಳಕೆ ಮಾಡುತ್ತಿದೆ ? (ಮಾಹಿತಿ ಒದಗಿಸುವುದು)